# ಗುಲಗಂಜಿ

ಜಿ. ಪಿ ರಾಜರತ್ನಂ

ಚಿತ್ರಕಾರರು

ಜೆ. ಜಿ. ಫಣೀಕರ್



ಪ್ರೋಗ್ರೆಸ್ ಬುಕ್‌ಸ್ಟಾಲ್

ಮೈಸೂರು

೧೯೩೪

# ವಿವರ

—

# ಕನ್ನಡ ನಾಡಿನ ಕಂದನಿಗೆ

ಇದುವರೆಗೆ 'ತುತ್ತೂರಿ,' 'ಕಡಲೆಪುರಿ,' 'ಚುಟಕ' ಎಂಬ ಮೂರು ಪುಸ್ತಕಗಳ ತುಂಬ ಪದ್ಯ ಬರೆದು ನಿನಗೆ ಕೊಟ್ಟಿದ್ದೇನೆ. ಜೊತೆಗೆ 'ಕಂದನ ಕಾವ್ಯಮಾಲೆ' ಎಂಬ ನಾಲ್ಕನೆಯ ಪುಸ್ತಕವೂ ನಿನಗೆ ಬಂದಿದೆ. ಅದರಲ್ಲಿ ಹಿರಿಯ ಅಣ್ಣಂದಿರು ಹತ್ತುಹದಿನೈದು ಜನರ ಮುದ್ದುಮುದ್ದಾದ ಪದ್ಯಗಳು ಇವೆ.

ನಿನಗೆ ಇಷ್ಟು ಪದ್ಯಗಳನ್ನು ಬರೆದುದು ಸಾಕು, ಕೊಂಚ ಗದ್ಯವನ್ನು ಕೊಡೋಣ ಎಂದು ಮನಸ್ಸಾಯಿತು. ಈ ಪುಸ್ತಕ ಬರೆದೆ.

ಪುಸ್ತಕವನ್ನು ಬರೆದ ಮೇಲೆ, ಪುಸ್ತಕಕ್ಕೆ ಏನು ಹೆಸರು ಇಡುವುದು ಎಂದು ಯೋಚನೆಮಾಡಿದೆ. ನಿನ್ನಂತಹ ಕೆಲವು ಪುಟ್ಟ ಮಕ್ಕಳನ್ನು ಕೇಳಿದೆ—ಈ ಪುಸ್ತಕಕ್ಕೆ ಏನು ಹೆಸರು ಇಡೋಣ ಎಂದು. ಒಬ್ಬೊಬ್ಬರು ಒಂದೊಂದು ಹೇಳಿದರು. 'ಮಿಠಾಯಿ,' 'ದೋಸೆ,' 'ಬುಗುರಿ' ಎಂದು ಹೀಗೆಯೇ ಇನ್ನೂ ಹೇಳಿದರು. ಒಬ್ಬರು ಹೇಳಿದುದನ್ನು ಇನ್ನೊಬ್ಬರು ಒಪ್ಪಲಿಲ್ಲ. ಕಡೆಗೆ ಒಂದು ಪುಣಾಣಿ ಮಗು 'ಗುಲಗಂಜಿ' ಎಂದಿತು.

ಅದನ್ನೇ ಎಲ್ಲರೂ ಒಪ್ಪಿದರು. ಅದರ ಪ್ರಕಾರ ಈ ಪುಸ್ತಕಕ್ಕೆ 'ಗುಲಗಂಜಿ' ಎಂದು ಹೆಸರು ಕೊಟ್ಟಿದ್ದೇನೆ.

ಈ 'ಗುಲಗಂಜಿ'ಯಲ್ಲಿ ಹನ್ನೆರಡು ಗದ್ಯದ ಚೂರುಗಳಿವೆ. ಕೆಲವು ಪುಟ್ಟ ಕತೆಗಳು. ಕೆಲವು ಮಕ್ಕಳಾಡುವ ಮಾತುಗಳು. ಜಾಗ ಮಿಕ್ಕಿರುವ ಐದು ಕಡೆಗಳಲ್ಲಿ ಪುಟ್ಟ ಪುಟ್ಟ ಪದ್ಯ ಹಾಕಿದ್ದೇನೆ.

ಗದ್ಯ ಓದಿ ಬೇಜಾರಾದರೆ ಪದ್ಯ ಓದು. ಪದ್ಯ ಓದಿ ಬೇಜಾರಾದರೆ ಗದ್ಯ ಓದು. ಎರಡೂ ಬೇಜಾರಾದರೆ ಪುಸ್ತಕ ಮುಚ್ಚಿ ಇಡು. ಆಡುವುದಕ್ಕೆ ಓಡು.

# ಚೊಟಾಟ

ಮೈದಾನದಲ್ಲಿ ಒಂದು ಮರ ಇತ್ತು. ಮರದ ಮೇಲೆ ಒಂದು ಕಾಗೆ ವಾಸವಾಗಿತ್ತು. ಮರದ ಕೆಳಗಡೆ ಒಂದು ಇಲಿ ವಾಸವಾಗಿತ್ತು.

ಒಂದು ದಿನ, ಆ ಕಾಗೆಗೂ ಇಲಿಗೂ ಚೊಟಾಟ ಆಡಬೇಕೆಂದು ಆಸೆ ಆಯಿತು. ಯಾರು ಮುಂಚೆ ಹಿಡಿಯಬೇಕು ಎಂದು ಎರಡೂ ಅಂಟುಹಾಕಿದುವು. ಇಲಿಯೇ ಮೊದಲು ಹಿಡಿಯಬೇಕಾಯಿತು.

ಕಾಗೆಯು ದೂರವಾಗಿ ನಿಂತುಕೊಂಡು ಚೊಟೆಂದು ಕೂಗಿತು. ಇಲಿಯು ಹಿಡಿಯುವುದಕ್ಕೆ ಓಡಿಬಂತು. ಕಾಗೆಯು ಹಾರಿಹೋಗಿ ಒಂದು ಮರದ ಮೇಲೆ ಕುಳಿತು ಕೊಂಡಿತು.

ಇಲಿ ಜಾಣ ಇಲಿ. ಕಾಗೆಗೆ ಗೊತ್ತಾಗದ ಹಾಗೆ ಮೆಲ್ಲಗೆ ಹಿಂದುಗಡೆಯಿಂದ ಮರವನ್ನು ಹತ್ತಿತು. ಹತ್ತಿ, ಕಾಗೆಯ ಕಾಲಿಗೆ ಕೈ ಹಾಕಿ ಹಿಡಿದುಕೊಂಡಿತು.

ಕಾಗೆಯೇ ಸೋತ ಹಾಗಾಯಿತು. ಪುನಃ ಕಾಗೆಯೇ ಹಿಡಿಯಬೇಕಾಯಿತು.

ಕಾಗೆಯೂ ಇಲಿಯೂ ಮರದಿಂದ ಕೆಳಗೆ ಇಳಿದುವು.

ಇಲಿಯು ಚೊಟ್ಟೆಂದು ಕೂಗಿ ಓಡಿಹೋಯಿತು. ಓಡಿಬಂದು ಬಿಲದಲ್ಲಿ ತೂರಿಕೊಂಡಿತು. ಒಳಗಿನಿಂದ ಚೊಟ್ಟೆಂದು ಪುನಃ ಕಿರಿಚಿಕೊಂಡಿತು.

ಕಾಗೆಯೇ ಹಿಡಿಯಬೇಕಾಗಿತ್ತು. ಹಿಡಿಯಲು ನೋಡಿತು. ಬಿಲದೊಳಗೆ ಹೋಗಲು ಕೈಲಾಗಲಿಲ್ಲ. ಹೇಗೆಹೇಗೋ ನೋಡಿತು. ಏನೇನೋ ಮಾಡಿತು. ಆದರೂ ಒಳಗೆ ನುಗ್ಗಲಾರದೆ ಹೋಯಿತು. ಪುನಃ ಕಾಗೆಯೇ ಸೋತುಹೋಯಿತು.

ಕಾಗೆಯು ಸೋತೆ ಎಂದು ಕೂಗಿತು. ಇಲಿಯು ಹೊರಕ್ಕೆ ಬಂತು. ಆಟ ಸಾಕೆಂದು ಎರಡೂ ನಗುತ್ತ ಮನೆಗೆ ಹೋದುವು.

---

## ನಕಲಿಯ ರಾಮಾಚಾರಿ

ನಕಲಿಯ ರಾಮಾಚಾರಿ
ಓಡುತ ನೆಗೆಯುತ ಹಾರಿ
ಕೋತಿಯ ಹಾಗೆ
ಹಾಕುತ ಲಾಗ
ಧುಡುಮನೆ ಬಿದ್ದನು ಜಾರಿ!

# ಭಾಗೀರಥಿ

ಭಾಗೀರಥಿಗೆ ಬಹಳ ಜಂಭ.

ಭಾಗೀರಥಿ ನಮ್ಮ ಮನೆಯ ಹಿಂದುಗಡೆ ಮನೆಯ ಹುಡುಗಿ. ತನಗೆ ಹೊಸದಾಗಿ ಸೀರೆ ಬಂದಿದೆ ಎಂದು ಅವಳಿಗೆ ಅತಿ ಜಂಭ.

ಹೋದ ಸೋಮವಾರದವರೆಗೂ ಕೂಗಿದರೆ ನಿಂತು ಕೊಂಡು ನಿಧಾನವಾಗಿ ಮಾತನಾಡುತ್ತಿದ್ದಳು. ಆದರೆ ಈಗ ಕೂಗಿದರೆ, ಕೇಳಿಸದವಳ ಹಾಗೆ ಹಾಗೆಯೇ ಹೋಗುವಳು. ಮುಖ ತಿರುಗಿಸಿಕೊಂಡು ಹೋಗುವಳು.

ಅವಳಿಗೆ ಆ ಹೊಸ ಸೀರೆ ಬಂದ ದಿವಸದಿಂದ ಬಹಳ ಜಂಭ ಬಂದಿದೆ.

ಭಾಗೀರಥಿಗೆ ಜಂಭ ಬಂದರೆ ನನಗೇನು ? ಅವಳಿಗೆ ಹೊಸ ಸೀರೆ ಬಂದರೆ, ನನಗೆ ಹೊಸ ಲಂಗ ಬಂದಿದೆ !

ಭಾಗೀರಥಿಗೆ ಜಂಭವಾದರೆ ನನಗೂ ಜಂಭವೇ.

# ಮೆರವಣಿಗೆ

---

ಸುಬ್ಬರಾಯನ ಬೀದಿಯ ತುಂಬ ಜನರು ನಿಂತಿದ್ದರು. ನೂರಾರು ಜನ. ಕೋಟಿ ಜನ. ರಸ್ತೆಯ ಎರಡು ಕಡೆಗಳಲ್ಲಿಯೂ ಗಿಜಿಗಿಜಿ ಎಂದು ತುಂಬಿಕೊಂಡಿದ್ದರು.

ಬೀದಿಯ ಮಧ್ಯದಲ್ಲಿ ಒಂದು ಗಾಡಿಯು ಬಂದು ನಿಂತುಕೊಂಡಿತು. ರಂಗರಾಯರ ಮನೆಯ ಮುಂದೆ ನಿಂತುಕೊಂಡಿತು. ಆ ಗಾಡಿಗೆ ಎರಡು ಕುದುರೆ ಕಟ್ಟಿತ್ತು. ಅದು ಜೋಡುಕುದುರೆಯ ಸಾರೋಟು. ಸಾರೋಟಿಗೆ ಹೂವಿನ ಸರಗಳನ್ನು ಅಲಂಕಾರವಾಗಿ ಕಟ್ಟಿದ್ದರು. ವಿಧವಿಧವಾದ ಹೂಗಳನ್ನು ಕಟ್ಟಿದ್ದರು.

ಸಾರೋಟಿನ ಎಡಕಡೆ ನೂರಾರು ದೀಪಗಳನ್ನು ಸಾಲಾಗಿ ನಿಲ್ಲಿಸಿದ್ದರು. ಬಲಗಡೆ ನೂರಾರು ದೀಪಗಳನ್ನು ಸಾಲಾಗಿ ನಿಲ್ಲಿಸಿದ್ದರು. ಮುಂದುಗಡೆ ಹಿಂದುಗಡೆ ಅಂತೂ ದೀಪಗಳೋ ದೀಪಗಳು. ನೋಡಿದ ಕಡೆ ದೀಪ. ತಿರುಗಿದ ಕಡೆ ದೀಪ. ಬೀದಿಯ ತುಂಬ ದೀಪ. ಬೀದಿಯು ದೀಪದ ಮಯವಾಗಿತ್ತು.

ಮನೆಯಿಂದ ಗಂಡ ಹೆಂಡತಿ ಇಬ್ಬರು ಹೊರಕ್ಕೆ

ಬಂದರು. ಜೋಡುಕುದುರೆಯ ಸಾರೋಟಿನಲ್ಲಿ ಜೊತೆಯಾಗಿ ಕುಳಿತುಕೊಂಡರು. ಅವರು ಹೊಸದಾಗಿ ಮದುವೆ ಆದವರು. ಅವರಿಗೆ ಆ ದಿವಸ ಮೆರವಣಿಗೆ.

ಆ ಮೆರವಣಿಗೆಯನ್ನು ನೋಡಲು ನೂರಾರು ಜನ ನಿಂತುಕೊಂಡಿದ್ದರು.

ಮೆರವಣಿಗೆಯ ಮುಂದುಗಡೆ ಓಲಗದವರು ಓಲಗ ಊದುತ್ತಾ ಹೊರಟರು.

ಸಾರೋಟಿನ ಮುಂದುಗಡೆ ಗಾಡಿ ಹೊಡೆಯುವವನು ಕುಳಿತುಕೊಂಡನು. ಎಡದ ಕೈಲಿ ಕುದುರೆಗಳ ಲಗಾಮನ್ನು ಹಿಡಿದನು. ಬಲದ ಕೈಲಿ ಚಾವಟಿ ಹಿಡಿದನು. ಹೈ ಹಾ ಎಂದು ಕೂಗಿದನು.

ಕುದುರೆಗಳು ನಿಧಾನವಾಗಿ ಹೊರಟವು.

ಬೀದಿಯಲ್ಲಿ ನಿಂತುಕೊಂಡಿದ್ದ ಜನರೂ ಸಾರೋಟಿನ ಹಿಂದುಗಡೆಯೇ ಹೊರಟರು.

"ಹೊಸಾಹೊಸ ಗಂಡಹೆಂಡತಿಯರಿಗೆ ಜೈ!" ಎಂದು ಕೂಗಿದರು.

ಮೆರವಣಿಗೆಯು ಮುಂದೆ ಮುಂದೆ ಹೋಯಿತು.

# ಸೋಮಾರಿ ಸೀತಾರಾಮ

ಬೆಳಗಾಯಿತು.

ಪೂರ್ವದಿಕ್ಕಿನಲ್ಲಿ ಆಕಾಶಕ್ಕೆ ಚಿನ್ನ, ಬೆಳ್ಳಿ, ತಾಮ್ರ ಇವುಗಳ ಮುಲಾಮು ಹಾಕಿದಂತೆ ಬಣ್ಣ ಬಂದಿತ್ತು. ಪೂರ್ವದಿಕ್ಕಿನ ಬೆಟ್ಟಗಳ ಮರೆಯಿಂದ ಸೂರ್ಯನು ಇಣಿಕಿ ನೋಡಿದನು. ಅವನ ಮುಖದಿಂದ ಸಾವಿರಾರು ಕಿರಣಗಳು ಹೊರಟವು.

ಬೆಳಗಾಯಿತು.

ಕೆಂಪು, ಹಳದಿ, ಬಿಳುಪು ಬಣ್ಣಗಳ ರೇಶಿಮೆ ದಾರ ಗಳನ್ನು ಚೆಲ್ಲಿದ ಹಾಗೆ ಭೂಮಿಯಲ್ಲೆಲ್ಲ ಸೂರ್ಯನ ಬೆಳಕು ತುಂಬಿಕೊಂಡಿತು.

ಬೆಳಗಾಯಿತು.

ಬೆಳಕನ್ನು ಕಂಡು ಕೋಳಿಯು ಮೇಲೆದ್ದಿತು. ಕೊ— ಕ್ಕೊ—ಕ್ಕೋ ಎಂದು ಕೂಗಿತು. ತನ್ನ ಮರಿಗಳನ್ನೆಲ್ಲ ಕರೆದುಕೊಂಡು ಕಾಳನ್ನು ಹುಡುಕಲು ಹೊರಟಿತು.

ಬೆಳಗಾಯಿತು.

ಬೆಳಕನ್ನು ಕಂಡು ಹಕ್ಕಿಗಳೆಲ್ಲ ಎದ್ದುವು. ಕಿಚಿಪಿಚಿ

ಎಂದು ಕೂಗಾಡುತ್ತ ತಿಂಡಿಯನ್ನು ಸಂಪಾದಿಸಲು ಗೂಡನ್ನು ಬಿಟ್ಟುವು.

ಬೆಳಗಾಯಿತು.

ಬೆಳಕನ್ನು ಕಂಡು ಮೃಗಗಳೆಲ್ಲ ಮೇಲೆದ್ದುವು. ಮೈ ಒದರಿಕೊಂಡು ತಮ್ಮ ತಮ್ಮ ಕೆಲಸಗಳನ್ನು ಮಾಡಲು ಹೊರಟುವು.

ಬೆಳಗಾಯಿತು.

ಸೋಮಾರಿ ಸೀತಾರಾಮನಿಗೆ ಎಚ್ಚರವಾಯಿತು. ಅವನು ಕೋಳಿಯ ಕೂಗನ್ನು ಕೇಳಿದನು. ಪಕ್ಷಿಗಳು ಹಾರಿದ ಸದ್ದು ಅವನಿಗೆ ಕೇಳಿಸಿತು. ಮೃಗಗಳು ಓಡಾಡಿದುದು ಕೂಡ ಅವನಿಗೆ ಗೊತ್ತಾಯಿತು.

ಬೆಳಗಾಯಿತು.

ಆದರೆ ಸೀತಾರಾಮನು ಮಾತ್ರ ಏಳಲಿಲ್ಲ. "ಥು! ಬೆಳಗಾಯಿತು!" ಎಂದು ಬೇಜಾರುಪಟ್ಟನು. ಹಾಗೆಯೇ ಪಕ್ಕಕ್ಕೆ ಹೊರಳಿಕೊಂಡನು. ಮುಖದ ತುಂಬ ಮುಸುಕು ಎಳೆದುಕೊಂಡನು. ಪುನಃ ನಿದ್ರೆ ಮಾಡುತ್ತ ಗೊರಕೆ ಹೊಡೆದನು.

# ದಾಸರು

ದಾಸರು ದಿನವೂ ನಮ್ಮ ಬೀದಿಗೆ ಬರುವರು.

ಅವರ ಬಾಯಿಯ ತುಂಬ ಏನೇನೋ ಹಾಡು. ಮೈ ತುಂಬ ಮಡಿಪಂಚೆ. ಹಣೆಯ ತುಂಬ ಅವರ ಜಾತಿಯ ಗುರುತು. ಕೈ ತುಂಬ ತಾಳ, ತಂಬೂರಿ. ಎದೆಯಮೇಲೆ ಜನಿವಾರ, ತುಳಸಿಮಣಿ. ಎಡಗಡೆಯ ಹೆಗಲಿನ ಕೆಳಗೆ ಒಂದು ಜೋಳಿಗೆ.

ದಾಸರು ಹೀಗೆ ಅಲಂಕಾರ ಮಾಡಿಕೊಂಡು ನಮ್ಮ ಬೀದಿಗೆ ಬರುವರು. ಒಂದೊಂದು ದಿವಸ ಒಂದೊಂದು ಬೀದಿಗೆ ಹೋಗುವರು. ಹೀಗೆ ಹಾಡಿಕೊಂಡು ಹೋದ ಕಡೆಯಲ್ಲೆಲ್ಲ ಜನರು ಅವರಿಗೆ ಅಕ್ಕಿ ಹಾಕುವರು. ದಾಸರು ದೇವರ ಹೆಸರು ಹೇಳಿಕೊಂಡು ಊಟ ಮಾಡುವರು.

ದಾಸರು ಬಂದು ಹಾಡಿದರೆ, ಹಾಡಲಿ. ನಾವೂ ಕೇಳೋಣ. ಸಂತೋಷಪಡೋಣ. ಆದರೆ ನಾವು ಮಾತ್ರ ದುಡಿಯೋಣ. ಕೆಲಸಮಾಡೋಣ. ಬೆವರು ಹರಿಸೋಣ. ಕಾಸು ಸಂಪಾದಿಸೋಣ. ಆ ಕಾಸಿಗೆ ಅಕ್ಕಿಯನ್ನು ಕೊಂಡುಕೊಂಡು ಊಟಮಾಡೋಣ. ಹಾಯಾಗಿರೋಣ.

# ಚೆಂಡಿನ ಒಳಗಿನ ಹಕ್ಕಿ

ಪಾರ್ವತಿ ರಾಮು ಇಬ್ಬರೂ ಚಿಕ್ಕ ಮಕ್ಕಳು. ಒಂದು ದಿನ ಅವರು ತೋಟದಲ್ಲಿ ರಬ್ಬರು ಚೆಂಡು ಆಡುತ್ತಿದ್ದರು. ಚೆಂಡು ಚೆನ್ನಾಗಿ ಪುಟ ಹಾರುತ್ತಿತ್ತು.

ಪಾರ್ವತಿಯು "ರಾಮು! ಈ ಚೆಂಡು ಯಾಕಪ್ಪ ಹೀಗೆ ಪುಟ ಹಾರುತ್ತೆ? ಹೇಳು" ಎಂದಳು.

ರಾಮು ಕೊಂಚ ಯೋಚಿಸಿ "ಇದರೊಳಗೆ ಒಂದು ಚಿಕ್ಕ ಹಕ್ಕಿ ಇದೆ. ನಾವು ಚೆಂಡು ಎಸೆದಾಗ ಅದು ಹಾರುತ್ತದೆ. ಅದಕ್ಕೇ ಅದು ಪುಟ ಹಾರುವುದು" ಎಂದನು.

ಪಾರ್ವತಿಯು "ಪಾಪ! ಹಕ್ಕಿಯನ್ನು ಹಾಗೆ ಚೆಂಡಿನಲ್ಲಿ ಕೂಡಿಹಾಕಬಾರದು—ಅಲ್ಲವೇನೋ?" ಎಂದಳು.

ಅದು ತಪ್ಪೆಂದು ಇಬ್ಬರೂ ಒಪ್ಪಿದರು. ಪಾರ್ವತಿಯು ಒಳಗಿನಿಂದ ಒಂದು ಚಾಕುವನ್ನು ತಂದಳು. ರಾಮು ಆ ಚೆಂಡನ್ನು ಹಿಡಿದುಕೊಂಡನು. ಪಾರ್ವತಿಯು ಜೋಪಾನವಾಗಿ ಮೆಲ್ಲಗೆ ಆ ಚೆಂಡನ್ನು ಕತ್ತರಿಸಿದಳು. ಏನೋ ಪುಸ್ಸೆಂದು ಸದ್ದಾಯಿತು. ಚೆಂಡು ಚಪ್ಪಟೆಯಾಯಿತು. ಇಬ್ಬರೂ ಮೊಕಮೊಕ ನೋಡಿದರು.

ರಾಮು "ಹಕ್ಕಿ ಇರಲಿಲ್ಲ ಪಾರ್ವತಿ!" ಎಂದನು.

ಪಾರ್ವತಿಯು ಚೆಂಡನ್ನು ನೆಲಕ್ಕೆ ಎಸೆದಳು. ಚೆಂಡು ಪುಟ ಹಾರಲಿಲ್ಲ.

"ನೋಡಪ್ಪ! ಹಕ್ಕಿ ಹಾರಿಹೋಗಿದೆ. ಆದಕ್ಕೇ ಈಗ ಪುಟ ಹಾರುವುದಿಲ್ಲ" ಎಂದಳು.

ರಾಮು ಪುನಃ ಮೊಕಮೊಕ ನೋಡಿದ.

"ನಮಗೆ ಕಾಣಿಸಲಿಲ್ಲ ಅಷ್ಟೆ. ಹೋಗಲಿ ಹೇಗಾದರೂ ಹಕ್ಕಿ ಹಾಯಾಗಿ ಹಾರಿಹೋಯಿತಲ್ಲ! ಅಷ್ಟೆ ಸಾಕು!" ಎಂದು ಪಾರ್ವತಿ ಹೇಳಿದಳು.

ರಾಮುವೂ "ಹೌದು. ಅಷ್ಟೇ ಸಾಕು" ಎಂದನು.

— — —

## ಬೈರನ ಕುಣಿತ

ಕೈಲಿ ಬೈರಿಗೆ!
ಮೈಲಿ ಚೈನು!
ಬೈರ ಕುಣಿದನು! ತೈ ತಕಾ!
ಹೈಹ! ಸೈಸೈ!
ಕುಣಿದು ಜೈಜೈ!
ಪೈಸ ಕೇಳಿದ! ತೈ ತಕಾ!

# ಬೈರನ ಕುದುರೆ ಹೈ!

ಬೈರನು ಒಬ್ಬ ರೈತ. ಅವನು ಮೈಸೂರಿನವನು. ಅವನ ಹತ್ತಿರ ಒಂದು ಕುದುರೆ ಇತ್ತು. ಅದರ ಹೆಸರು ವೈಕುಂಠ.

ಒಂದು ದಿವಸ ಬೈರನು ವೈಕುಂಠನ ಮೇಲೆ ಹತ್ತಿದನು. ಅದರ ಮೈ ಸವರಿದನು. ಎಡದಕೈಲಿ ಲಗಾಮು ಗಳನ್ನು ಹಿಡಿದುಕೊಂಡು "ಹೈ! ಹೈ! ಹೈ!" ಎಂದು ಕೂಗಿದನು.

ಕುದುರೆಯು ನಾಗಾಲೋಟ ಓಡಿತು.

ಬೈರನಿಗೆ ಬಹಳ ಸಂತೋಷವಾಯಿತು.

"ಬೈರನ ಕುದುರೆ ಹೈ !
ಥೈ ! ತಕ ! ಥೈ !
ವೈಕುಂಠ ! ನೀ ಸೈ !
ಜೈ ! ಜೈ ! ಜೈ !" ಎಂದು ಹಾಡಿದನು.

ಕುದುರೆಯು ಠೈಂ ಎಂದು ಹಾರಿತು. ಘಂಟೆಗೆ ನೂರಾರು ಮೈಲಿ ಓಡಿತು.

ಬೈರನ ಬಟ್ಟೆಗಳೆಲ್ಲವೂ ಗಾಳಿಗೆ ಭುರ್ರೆಂದು ಆಡುತ್ತಿದ್ದುವು.

ಬೈರನಿಗೆ ವೈ ಹಿಡಿಸದಷ್ಟು ಸಂತೋಷವಾಯಿತು.

“ ವೈ ವೈಕುಂಠ ವೈ !
ಗ ಗ್ಗಾ ಗಿ ಗ್ಗೀ ಗೈ !
ಚ ಚ್ಚಾ ಚಿ ಚ್ಚೀ ಚೈ !
ವೈ ವೈಕುಂಠ ವೈ ! ”

ಎಂದು ಬಾಯಿಗೆ ಬಂದ ಹಾಗೆ ಹಾಡಿಕೊಂಡು, ಕುದುರೆಯನ್ನು ಓಡಿಸಿಕೊಂಡು ಬೈರನು ಇನ್ನೂ ಮುಂದೆ ಮುಂದೆ ಹೋದನು.

---

## ಕರ್‍ರಗಿರುವ ಕಾಗೆ

ಕರ್‍ರಗಿರುವ ಕಾಗೆಯೊಂದು
ಸರ್‍ರೆಂದು ಮೇಲೆ ಹಾರಿ
ಗಿರ್‍ರೆಂದು ಸುತ್ತಿ ತಿರುಗಿ
ಕೆಳಗೆ ಜಾರಿತು.
ಕರ್‍ರೆಂದು ಕೂಗಿಕೊಂಡು
ಜರ್‍ರೆಂದು ಜಾರುವಾಗ
ಪರ್‍ರೆಂದು ಅದರ ರೆಕ್ಕೆ
ಹರಿದುಹೋಯಿತು !

# ನಮ್ಮ ಮನೆಯ ಕರು

ಒಂದು ದಿನ ಬೆಳಿಗ್ಗೆ ನಮ್ಮ ಮನೆಯ ಕರು ತಪ್ಪಿಸಿ ಕೊಂಡುಹೋಯಿತು. ಆದರೂ ಆ ಕರುವಿಗೆ ಹೆದರಿಕೆ ಯಾಗಲಿಲ್ಲ. ತಪ್ಪಿಸಿಕೊಂಡು ಬಂದಮೇಲೆ, ಕರುವು ನಿಂತುಕೊಂಡು ಸುತ್ತಲೂ ನೋಡಿತು.

ಆಕಾಶವು ನೀಲಿಯಾಗಿತ್ತು. ಸುತ್ತಲೂ ಹುಲ್ಲು ಹಸುರಾಗಿತ್ತು. ಪಕ್ಕದಲ್ಲಿ ಒಂದು ಸಣ್ಣ ಹೊಳೆಯು ಗುಳುಗುಳು ಎಂದು ಸದ್ದು ಮಾಡುತ್ತ, ಹರಿಯುತ್ತಿತ್ತು. ಬಿಸಿಲು ಹೊಳೆಯ ನೀರಿನ ಮೇಲೆ ತೇಲಿಕೊಂಡು ಹೋಗುತ್ತಿತ್ತು.

ಹೊಳೆಯಲ್ಲಿ ನೀರು ಹೆಚ್ಚಾಗಿರಲಿಲ್ಲ. ಕರುವು ಹೊಳೆ ಯನ್ನು ಮೆಲ್ಲಗೆ ದಾಟಿ ಆಚೆ ಕಡೆಗೆ ಬಂದಿತು. ಅಲ್ಲಿ ದೊಡ್ಡದೊಡ್ಡ ಮರಗಳು ಬೆಳೆದಿದ್ದುವು. ನೆರಳು ತುಂಬಾ ಬಿದ್ದಿತ್ತು. ಕರುವು ಕುಣಿದಾಡುತ್ತ ಮುಂದೆ ಓಡಿತು.

ಕೊಂಚ ಹೊತ್ತಾದ ಮೇಲೆ ಅದಕ್ಕೆ ಬೇಜಾರಾ ಯಿತು. ಹಾಗೆಯೇ ಹಿಂಟರುಗಿ ಪುನಃ ಹೊಳೆಯ ಹತ್ತಿರಕ್ಕೆ ಬಂದಿತು. ಹೊಳೆಯನ್ನು ದಾಟುವಾಗ ಒಂದು ಕಡೆ ಅದರ ಕಾಲು ಸಿಕ್ಕಿಕೊಂಡಿತು. ಕರುವಿಗೆ ಕಾಲನ್ನು

ಬಿಡಿಸಿಕೊಳ್ಳಲು ಆಗಲಿಲ್ಲ. ಎಷ್ಟೆಷ್ಟೋ ಒದ್ದಾಡಿತು. ಆದರೂ ಕಾಲು ಬಿಡಿಸಿಕೊಳ್ಳಲು ಆಗಲಿಲ್ಲ.

ಆಗ ಅದಕ್ಕೆ ಹೆದರಿಕೆಯಾಯಿತು. ಕಾಲನ್ನು ಎಳೆಯುತ್ತ, "ಅಂಬಾ" ಎಂದು ಕೂಗಿತು. ಸುಮ್ಮನೆ "ಅಂಬಾ" ಎಂದು ಕೂಗುತ್ತಿತ್ತು.

ಮಧ್ಯಾಹ್ನವಾಯಿತು.

ಆಗ ಇಬ್ಬರು ದನ ಕಾಯುವ ಹುಡುಗರು ನೀರು ಕುಡಿಯಬೇಕೆಂದು ಆ ಹೊಳೆಗೆ ಬಂದರು. ಕರುವಿಗೆ ಆ ಹುಡುಗರನ್ನು ನೋಡಿ ಕೊಂಚ ಧೈರ್ಯ ಬಂದಿತು. "ಅಂಬಾ" ಎಂದು ಕೂಗಿತು.

ಆ ಇಬ್ಬರು ಹುಡುಗರೂ ತಿರುಗಿನೋಡಿದರು. ಆ ಕರುವನ್ನು ಕಂಡು ಅವರಿಗೆ 'ಅಯ್ಯೋ ಪಾಪ!' ಎನ್ನಿಸಿತು. ಮೆಲ್ಲಗೆ ನೀರಿಗೆ ಇಳಿದುಹೋಗಿ ಕರುವಿನ ಕಾಲನ್ನು ಬಿಡಿಸಿದರು.

ಕರುವಿಗೆ ನಿಂತುಕೊಳ್ಳುವುದಕ್ಕೆ ಕೂಡ ಆಗುತ್ತಿರಲಿಲ್ಲ. ಆ ಹುಡುಗರೇ ಅದರ ಮೈಯನ್ನು ತಮ್ಮ ಚೌಕದಿಂದ ಒರಸಿದರು. ಆ ಮೇಲೆ ಅದನ್ನು ತಾವೇ ಎತ್ತಿಕೊಂಡರು.

ಅದು ನಮ್ಮ ಮನೆಯ ಕರುವೆಂದು ಆ ಹುಡುಗರಿಗೆ ಗೊತ್ತಿತ್ತು. ಆದುದರಿಂದ ಅವರು ಅದನ್ನು ನಮ್ಮ ಮನೆಗೆ ತಂದರು.

ಅಷ್ಟುಹೊತ್ತಿಗೆ ಆ ಕರುವಿನ ತಾಯಿಯು ಮಗುವನ್ನು ಕಾಣದೆ ಪೇಚಾಡುತ್ತ ಮನೆಗೆ ಬಂದಿತ್ತು. ಈಗ ತನ್ನ ಮಗುವನ್ನು ಕಂಡು ಅದಕ್ಕೆ ಬಹಳ ಸಂತೋಷವಾಯಿತು. ಕರುವನ್ನು ನಾಲಿಗೆಯಿಂದ ನೆಕ್ಕುತ್ತ, ಹಸುವು ಆ ಹುಡುಗರ ಕಡೆ ನೋಡಿತು. "ಅಂಬೇ" ಎಂದು ಗಟ್ಟಿಯಾಗಿ ಕೂಗುತ್ತ ತನ್ನ ಸಂತೋಷವನ್ನು ತೋರಿಸಿತು.

ಆ ಮೇಲೆ ಹಸುವೂ ಕರುವೂ ಪುನಃ ಹುಲ್ಲು ಮೇಯುವುದಕ್ಕೆ ಹೋದುವು.

ಕರುವನ್ನು ಕಾಪಾಡಿದುದಕ್ಕಾಗಿ ಆ ದನ ಕಾಯುವ ಹುಡುಗರಿಗೂ ಸಂತೋಷವಾಯಿತು. ಅವರು ಕೂಡ ನಗುನಗುತ್ತ ಪುನಃ ದನ ಕಾಯುವುದಕ್ಕೆ ಹೋದರು.

## ನಮಗೆ ಈಗ ರಜ!

ನಮಗೆ ಈಗ ರಜ!
ಅದೇ ಬಹಳ ಮಜ!
ಬಳಪ ಬರಹ
ಅದರ ತರಹ
ಕೆಲಸ ಎಲ್ಲ ವಜ!

# ಗೌಡನ ದೌಡು

ನಮ್ಮ ಊರಿನ ಮುಂದೆ ಒಂದು ಚೌಡಿಯ ಗುಡಿ ಇದೆ. ಆ ಗುಡಿಯ ಪೂಜಾರಿಯು ಒಬ್ಬ ಗೌಡ. ಯಾರು ಏನು ಕೇಳಿದರೂ 'ಹೌದು' ಎಂದು ಅವನು ತಲೆ ಆಡಿಸುವನು. ಅದು ಅವನ ಪದ್ಧತಿ.

ಒಂದು ದಿವಸ ಗೌಡನು ಪಕ್ಕದ ಹಳ್ಳಿಯಿಂದ ಬರುತ್ತಿದ್ದನು. ಅವನ ಕಂಕುಳಲ್ಲಿ ಒಂದು ದುಪಟಿಯ ಗಂಟಿತ್ತು. ಆ ದುಪಟಿಯಲ್ಲಿ ಮೂರು ಸೇರು ತೌಡು ಮುದುರಿಕೊಂಡು ಬಂದಿದ್ದನು.

ಬರುತ್ತಿರುವಾಗ ಒಂದು ನಾಯಿ ಅವನ ಎದುರಿಗೆ ಬಂತು. ಆ ನಾಯಿಯ ಹೆಸರು ಮೌಳಿ.

ಮೌಳಿಯು ದುಪಟಿಯ ಗಂಟನ್ನು ನೋಡಿತು.

"ಗೌಡ! ದುಪಟಿಯ ಒಳಗೆ ಏನಿದೆ? ಸೌತೆಯ ಕಾಯಿಯೆ?" ಎಂದು ಕೇಳಿತು.

ಗೌಡನು ಪದ್ಧತಿಯ ಮೇರೆ "ಹೌದು! ಸೌತೆಯ ಕಾಯಿ!" ಎಂದು ತಲೆ ಆಡಿಸಿದನು.

"ನನಗೂ ಸ್ವಲ್ಪ ಸೌತೆಯಕಾಯಿ ಕೊಡು ಗೌಡ!" ಎಂದು ಮೌಳಿಯು ಕೇಳಿತು.

ಗೌಡನು ದುಪಟಿಯನ್ನು ಬಿಚ್ಚಿದನು. ಮೌಳಿಯು ನೋಡಿತು. ಒಳಗಡೆ ತೌಡು ಇರುವುದು ಅದಕ್ಕೆ ಕಾಣಿಸಿತು. ತನಗೆ ಗೌಡನು ಸುಳ್ಳು ಹೇಳಿ ಮೋಸಮಾಡಿದನೆಂದು ಮೌಳಿಗೆ ಕೋಪ ಬಂತು. ಹಲ್ಲು ತೋರಿಸುತ್ತ "ಭೌ!" ಎಂದು ಬಗುಳಿತು.

ಗೌಡನು ಹೆದರಿದನು. ಬೇಗಬೇಗನೆ ಗಂಟು ಎತ್ತಿಕೊಂಡು ದೌಡು ಹೊಡೆದನು. ನಾಯಿಯೂ ಅವನ ಹಿಂದೆಯೇ ಓಡಿತು.

---

## ದೌಡು ಹೊಡೆದನು ಗೌಡನು!

ಗೌರಿ ತೋರಿದ
ಚೌಕದೊಳಗಡೆ
ತೌಡು ಸುರಿದನು ಗೌಡನು;
ತೌಡು ಸುರಿದರೆ
ಚೌಕ ಹರಿಯಿತು!
ದೌಡು ಹೊಡೆದನು ಗೌಡನು!

# ನಾಯಿಯೂ ಅದರ ನೆರಳೂ

ಸೂರ್ಯನು ಆಗತಾನೆ ಪೂರ್ವದಲ್ಲಿ ಹುಟ್ಟುತ್ತಿದ್ದನು. ಒಂದು ನಾಯಿಯು ಪಶ್ಚಿಮದ ಕಡೆಗೆ ಓಡಿಹೋಗುತ್ತಿತ್ತು. ತಿಂಡಿ ಹುಡುಕಿಕೊಂಡು ಓಡಿಹೋಗುತ್ತಿತ್ತು. ಹಾಗೆಯೇ ಓಡುತ್ತ ಒಂದು ಸಲ ನೆಲದಕಡೆ ನೋಡಿತು.

ನೆಲದಲ್ಲಿ ನಾಯಿಯ ನೆರಳು ಬಿದ್ದಿತ್ತು. ನಾಯಿಯು ಓಡಿದರೆ ನೆರಳು ಅದರ ಮುಂದುಗಡೆ ಓಡುತ್ತಿತ್ತು. ಆದರೆ ನಾಯಿಗೆ ಅದು ತನ್ನ ನೆರಳೆಂದು ತಿಳಿಯಲಿಲ್ಲ. ನೆರಳನ್ನು ಒಂದು ಕರಿಯ ನಾಯಿ ಎಂದು ತಿಳಿದುಕೊಂಡಿತು. ಓಡುವುದರಲ್ಲಿ ಆ ಕರಿಯ ನಾಯನ್ನು ಸೋಲಿಸಬೇಕೆಂದು ನಮ್ಮ ನಾಯಿ ಮುಂದೆ ಮುಂದೆ ಓಡಿತು. ಆದರೆ ಎಷ್ಟು ಓಡಿದರೂ ಕರಿಯ ನಾಯಿಗಿಂತ ಮುಂದೆ ಹೋಗುವುದಕ್ಕೆ ಆಗಲಿಲ್ಲ.

ನಾಯಿಗೆ ಓಡಿ ಓಡಿ ಸಾಕಾಯಿತು. ಅಷ್ಟು ಹೊತ್ತಿಗೆ ಹನ್ನೆರಡು ಗಂಟೆ ಆಯಿತು. ಸೂರ್ಯನು ತಲೆಯಮೇಲೆ ಬಂದಿದ್ದನು. ನಾಯಿ ಕೆಳಗೆ ನೆಲವನ್ನು ನೋಡಿತು. ನೆರಳು ಸರಿಯಾಗಿ ನಾಯಿಯ ಕೆಳಗಡೆ ಬಿದ್ದಿತ್ತು. ತಾನು ಕರಿಯ ನಾಯಿಯ ಸಮಕ್ಕೆ ಬಂದೆನೆಂದು ನಮ್ಮ ನಾಯಿಗೆ ಸಂತೋಷವಾಯಿತು.

ಆದರೆ ಅದನ್ನು ಮೀರಿಸಬೇಕೆಂದು ನಾಯಿಯು ಪುನಃ ಓಡಿತು. ಒಂದೆರಡು ಗಂಟೆಗಳ ಹೊತ್ತು ಓಡಿ, ಕಡೆಗೆ ಕೆಳಗಡೆ ನೋಡಿತು. ನೆರಳು ಕಾಣಿಸಲಿಲ್ಲ. ಹಿಂದುಗಡೆ ತಿರುಗಿ ನೋಡಿತು. ನೆರಳು ನಾಯಿಯ ಹಿಂದುಗಡೆ ಬಿದ್ದಿತ್ತು. ಕರಿಯ ನಾಯಿ ಹಿಂದೆ ಬಿದ್ದು ಹೋಯಿತೆಂದು ನಾಯಿಗೆ ಇನ್ನೂ ಸಂತೋಷವಾಯಿತು. ಅದಕ್ಕೆ ತಿನ್ನುವ ಯೋಚನೆಯೇ ಮರೆತು ಹೋಯಿತು. ಕರಿಯ ನಾಯನ್ನು ಸೋಲಿಸಬೇಕೆಂದು ಅದು ಹಟ ಹಿಡಿದಿತ್ತು.

ನಾಯಿ ಪುನಃ ಓಡಿತು. ಸಂಜೆ ಆಗುವವರೆಗೂ ಓಡಿತು. ಆ ಮೇಲೆ ಹಿಂದಿರುಗಿ ನೋಡಿತು. ಸೂರ್ಯನು ಮುಳುಗಿಹೋಗಿದ್ದನು. ನೆರಳು ಕಾಣಿಸಲಿಲ್ಲ. ಕರಿಯ ನಾಯಿ ಹಿಂದೆಯೇ ಎಲ್ಲಿಯೋ ನಿಂತುಹೋಯಿತೆಂದು ಈ ನಾಯಿ ತಿಳಿದುಕೊಂಡಿತು. ಕರಿಯ ನಾಯನ್ನು ಸೋಲಿಸಿಯೇ ಬಿಟ್ಟೆನೆಂದು ಅದಕ್ಕೆ ಸಂತೋಷವಾಯಿತು. ತಾನೇ ಗೆದ್ದೆನೆಂದು ಅದಕ್ಕೆ ತೃಪ್ತಿಯಾಯಿತು.

ಪಕ್ಕದಲ್ಲಿ ಒಂದು ಸಣ್ಣ ಹೊಳೆಯಿತ್ತು. ನಾಯಿ ಅದರಲ್ಲಿ ಕೊಂಚ ನೀರು ಕುಡಿಯಿತು. ಕರಿಯ ನಾಯನ್ನು ತಾನು ಸೋಲಿಸಿದೆನೆಂದು ಹಿಗ್ಗಿತು. ಅಲ್ಲಿಯೇ ಒಂದು ಮರದ ಕೆಳಗಡೆ ಮಲಗಿಕೊಂಡು, ನಗುತ್ತ ಹಾಯಾಗಿ ನಿದ್ದೆಹೋಯಿತು.

# ಹೂವು—ದುಂಬಿ

ಒಂದು ತೋಟದಲ್ಲಿ ಒಂದು ಹೂವಿನ ಗಿಡ ಇತ್ತು. ಆ ಗಿಡದಲ್ಲಿ ಒಂದು ಪುಟಾಣಿ ಮೊಗ್ಗು ಬಿಟ್ಟಿತು. ಮೊಗ್ಗು ಬೆಳೆದು ಅರಳಿ ಹೂವಾಯಿತು. ಆ ಹೂವಿನ ರೂಪ ರಂಗು ನೋಡಿದರೆ ಬಹಳ ಸಂತೋಷವಾಗುತ್ತಿತ್ತು. ಅದರ ವಾಸನೆಯು ಘಮಘಮ ಎಂದಿತ್ತು. ಅದರ ಜೋಕೇ ಜೋಕು.

ಒಂದು ದಿವಸ ಆ ಹೂವಿನ ಮೇಲೆ ಗಾಳಿಯು ಮೆಲ್ಲಗೆ ಬೀಸಿತು. ಹೂವಿನ ವಾಸನೆಯು ಆ ಗಾಳಿಯ ಹೆಗಲ ಮೇಲೆ ಹತ್ತಿಕೊಂಡು ಸವಾರಿ ಹೋಯಿತು.

ವಾಸನೆಯು ಹಾಗೆಯೇ ಒಂದು ದುಂಬಿಯ ಹತ್ತಿರಕ್ಕೆ ಬಂದಿತು. ದುಂಬಿಯು ಆ ವಾಸನೆಗೆ ಮೂಗು ಅರಳಿಸಿಕೊಂಡಿತು. ವಾಸನೆಯು ಬಂದ ಕಡೆಗೆ ಹಾರಿತು. ಹೂವು ಇರುವ ಕಡೆಗೆ ಹಾರಿತು.

ಹಾರಿ, ಹಾರಿ, ಹೂವಿನ ಹತ್ತಿರಕ್ಕೆ ಬಂತು.

"ಹೂವೇ! ಹೂವೇ!" ಎಂದು ಕೂಗಿತು.

ಹೂವು, "ಬಾ! ಬಾ! ದುಂಬಿ!" ಎಂದು ಕರೆಯಿತು.

ದುಂಬಿಯು ಹಾರಿ ಹೂವಿನ ಮೇಲೆ ಕುಳಿತುಕೊಂಡು 'ನೀನು ನನಗೆ!' ಎಂದಿತು. ಹೂವು ದುಂಬಿಯ ಕಡೆ

ತಿರುಗಿ "ಹೌದು, ನಾನು ನಿನಗೆ! ನೀನು ನನಗೆ!" ಎಂದಿತು.

ದುಂಬಿಗೆ ಸಂತೋಷವಾಯಿತು. ಹೂವಿಗೂ ಸಂತೋಷವಾಯಿತು. ಎರಡೂ ಜೋಡಿಯಾದುವು.



# ರಂಗನ ಕುದುರೆ

ರಂಗನ ಕುದುರೆ ಬಹಳ ತಮಾಷೆಯ ಕುದುರೆ. ಅದಕ್ಕೆ ಮಿಕ್ಕ ಕುದುರೆಗಳ ಹಾಗೆ ಕೆನೆಯುವುದಕ್ಕೆ ಬರುವುದಿಲ್ಲ. ಎಲ್ಲರೂ ಮಾತನಾಡುವ ಹಾಗೆ ತಾನೂ ಮಾತನಾಡುವುದು. ಕೇಳಿದವರಿಗೆ ನಗು ಬರುವ ಹಾಗೆ ಮಾತನಾಡುವುದು.

ರಂಗನ ಮನೆಯ ಹಿಂದುಗಡೆ ಕುದುರೆ ವಾಸ ಮಾಡುವ ಲಾಯ ಇದೆ. ಒಂದು ಸಲ ರಂಗನು "ಕುದುರೆಯ ಮನೆ ಲಾಯ" ಎಂದನು. ಕುದುರೆಯು "ಹೌದು! ಹೌದು! ಕುದುರೆಯ ಮನೆ ಲಾಯ! ರಂಗನ ಮೈ ಗಾಯ!" ಎಂದು ಜವಾಬು ಹೇಳಿತು. ಕೇಳಿದವರು ಎಲ್ಲರಿಗೂ ನಗು ಬಂತು. ರಂಗನಿಗೂ ನಗು ಬಂತು. ಕುದುರೆಗೂ ನಗು ಬಂತು.

ರಂಗನ ಕುದುರೆ ಬಹಳ ತಮಾಷೆಯ ಕುದುರೆ.

ಅದು ಲಾಯದಿಂದ ಹೊರಗೆ ಬರುವಾಗ ಮೈಗೆಲ್ಲ ಎಣ್ಣೆ ಬಳಿದುಕೊಂಡು ಬರುವುದು. ಆಗ ಅದರ ಮೇಲೆ ಹತ್ತುವುದಕ್ಕೆ ಹೋದರೆ ಕಾಲು ಜಾರುವುದು. ಕಾಲು ಜಾರಿದರೆ ಕುದುರೆಯು ನಗುವುದು.

ಗಾಡಿಗೆ ಕ[illegible]ಬೇಕೆಂ[illegible] [illegible]ಯು ಗಾಡಿಯ ಹಿಂದುಗಡೆ ಹೋಗಿ ನಿಂತುಬಿಡುವುದು. 'ಮುಂದೆ ಬಾ!' ಎಂದು ಕರೆದರೆ 'ಉಹುಂ!' ಎಂದು ಮೊಂಡಾಟಮಾಡುವುದು.

ರಂಗನ ಕುದುರೆ ಬಹಳ ತಮಾಷೆಯ ಕುದುರೆ.

ಕುದುರೆಯು ಲಾಯದ ಒಳಗೆ ಇರುವಾಗ 'ಹಸಿವು' ಎಂದು ಕೂಗುವುದು. ರಂಗನು ಬೇಯಿಸಿದ ಹುರುಳಿ ತಂದರೆ, 'ಬೇಡ' ಎಂದು ತಲೆ ಆಡಿಸುವುದು. ರಂಗನು ಆಚೆ ಹೋದರೆ, 'ದಾಹ' ಎಂದು ಪುನಃ ಕೂಗುವುದು. ರಂಗನು ನೀರು ತಂದರೆ ಮುಖ ತಿರುಗಿಸಿಕೊಂಡು ಬಿಡುವುದು.

ಆದರೆ, ರಂಗನು ಮರೆಯಾದರೆ ಸಾಕು; ಹುರುಳಿಯ ಮಡಕೆಗೆ ಬಾಯಿ ಹಾಕುವುದು. ಚಕಚಕನೆ ಹುರುಳಿ ತಿಂದು, ನೀರು ಕುಡಿಯುವುದು. ಆ ಮೇಲೆ ಹಾಯಾಗಿ ಮಲಗಿಬಿಡುವುದು.

ರಂಗನ ಕುದುರೆ ಬಹಳ ತಮಾಷೆಯ ಕುದುರೆ. ಆದರೆ ಅದು ಸೋಮಾರಿ. ಆದರೂ ಅದು ಜಾಣ ಕುದುರೆ.

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.